# ಭಾರತಶಕ್ತಿ

ವೆಂಕಣ್ಣ

ಪ್ರಗತಿಶೀಲ ಲೇಖಕರ ಸಂಘ
ಬೆಂಗಳೂರು ನಗರ.

# ಭಾರತ ಶಕ್ತಿ

ಗೀತನಾಟಕ



‘ ವೆಂಕಣ್ಣ ’

ಪ್ರಗತಿಶೀಲ ಲೇಖಕರ ಸಂಘ

ಬೆಂಗಳೂರು ನಗರ.

೧೯೪೪ ಬೆಲೆ ಮೂರಾಣೆ

— ಪ್ರಕಾಶಕರು —

ಕೃಷ್ಣರಾವ್ ನಾಡಿಗೇರ—ಅನಂತಪದ್ಮನಾಭ ಸೋಗಾಲ

— ಕಾರ್ಯದರ್ಶಿಗಳು —

ಪ್ರಗತಿಶೀಲ ಲೇಖಕರ ಸಂಘ, ಬೆಂಗಳೂರು ನಗರ.

೨೬–೧೨–೧೯೪೩

ಸಾಹಿತ್ಯ ಪರಿಷತ್ತಿನ ಶಿವಮೊಗ್ಗೆ ಸಮ್ಮೇಳನದ ಸಂದರ್ಭದಲ್ಲಿ ಕೂಡಿದ
ಅ. ಕ. ಪ್ರ. ಲೇಖಕರ ಕೂಟದಲ್ಲಿ ಪ್ರಕಟವಾಯಿತು.

— ಮುದ್ರಕರು —

ಬಿ. ಎಸ್. ಸಂಪಂಗಯ್ಯ,
ಶ್ರೀ ರಾಮಕೃಷ್ಣ ಅಂಡ್ ಕೊ., ಶಂಕರದೇವರ ಮಠ,
ಮನವಾರ್ತೆಪೇಟೆ, ಬೆಂಗಳೂರು ನಗರ.

# ಮನವಿ

"ಕಲೆಗಾಗಿ ಕಲೆ", "ಸಾಹಿತ್ಯಕ್ಕೂ ರಾಜಕೀಯಕ್ಕೂ ಸಂಬಂಧವಿಲ್ಲ", "ಜನತೆ ವಿಚಾರವಿಲ್ಲದವರು, ನಾವು ಬರೆದುದನ್ನು ಸ್ವೀಕರಿಸುತ್ತಾರೆ: ಅವರ ಅಭಿಪ್ರಾಯವೇನಿದೆ", ಎಂಬ ಹಲವು ಹನ್ನೆರಡು ನೀತಿಗಳಿಗೆ ರಾಮಬಾಣ ಪ್ರಗತಿಶೀಲ ಲೇಖನಿ!

ನಮ್ಮ ಧ್ಯೇಯಗಳಲ್ಲಿನ ಹಲವು ರೂಪಗಳಲ್ಲಿ ಇದೊಂದು: ಈ ಗ್ರಂಥ ಪ್ರಕಟನೆ. ಆ ಮೂಲಕ ಪ್ರಗತಿಶೀಲ ಬರೆಹವೆಂದರೆ ಏನೆಂದು ನಾವು ತೋರಿಕೊಡಲು ಯತ್ನಿಸುತ್ತೇವೆ. ನಮ್ಮ ಜನತೆಯ ಸಮಸ್ಯೆಯನ್ನು ಬಗೆಹರಿಸಿ, ಅವರದೇ ಚಿತ್ರಗಳನ್ನು ಅವರಿಗೆ ಕೊಡಲೆಳಸಿದ್ದೇವೆ.

ಒಂದು ಹಿಡಿ ಅಕ್ಕಿ. ಅದು ಬೇಕಾದರೆ ಕೇಳಬೇಕು. ಕೇಳಿಕೆ ಹತ್ತು ಕಂಠಗಳಿಂದ ಬರಬೇಕು; ಅಂದರೆ ಐಕ್ಯತೆ ಬೇಕು. ಐಕ್ಯತೆ ಸಾಧನೆಯೇ ಸ್ವಾತಂತ್ರ್ಯದ, ದೇಶ ರಕ್ಷಣೆಯ, ಜನತೆಯ ಏಳಿಗೆಯ ದಾರಿ. ಅಂದರೆ ಅಕ್ಕಿಯೂ ಇಂದು ರಾಜಕೀಯವಾಗಿದೆ. ಅಕ್ಕಿಗಾಗಿ ನಡೆಸುವ ಹೋರಾಟ ಇಂದಿನ ಹೋರಾಟವಾಗಿದೆ; ಮಹಾಜನರ ನಿತ್ಯ ಯತ್ನವಿದೆ. ಅಂದರೆ ಅಕ್ಕಿಯ ಪ್ರಶ್ನೆ, ಅನ್ನದ ಸಮಸ್ಯೆ ರಾಜಕೀಯವೇ ಇದೆ. ಅನ್ನ ಬೇಡವಾದ ಸಾಹಿತಿಗಳೂ, ಕಲಾವಿದರೂ, ಧಾರ್ಮಿಕರೂ ಇರುವರೇ? ಆದುದರಿಂದಲೇ ನಾವನ್ನುತಿದ್ದೇವೆ—ಕಣ್ಣಿದ್ದ ಕುರುಡರ, ತಿಳಿವಿದ್ದ ಮೂಢರ ಸಾಹಿತ್ಯಬೇಡ. ಬೋರೇಗೌಡ, ಚಿನ್ನಸಾಮಿಯ ಸಾಹಿತ್ಯ ಬೇಕು, ಕಲೆ ಬೇಕು, ರಾಜಕೀಯ ಬೇಕು—ಸಂಸ್ಕೃತಿ ಬೇಕು.

ಈ ಧ್ಯೇಯದಿಂದ ಮುನ್ನಡೆಯಲು ಯತ್ನಿಸುತಿದ್ದೇವೆ. ನೂರರಲ್ಲಿ ೯೦ ಜನರ ಸಾಹಿತ್ಯ ರಚನೆಗೆ ಕೈಯಿಕ್ಕಿದ್ದೇವೆ.

ಅದರ ಮೊದಲ ಪ್ರಕಟನೆ. ಮಹಾಜನರ ಹೃದಯದ ಮೊಬಲ ಮಿಡಿತ! ಮೊದಲ ಕೂಗು ಇದು.

—ಪ್ರಕಾಶಕರ..

## ಮೊದಲ ಮಾತು

ಇದೊಂದು ಗೀತಾನಾಟಕ. ಸೂತ್ರಧಾರನು ರಂಗಭೂಮಿಯ ಹಿಂಗಡೆಗೆ ಕುಳಿತು ವಿಷಯದ ಭಾವಗಳಿಗನುಗುಣವಾಗಿ ಹಾಡುತ್ತಾನೆ. ಹಿಮ್ಮೇಳ ಅವನಿಗೆ ಸಹಾಯ ಮಾಡುತ್ತವೆ; ಆದರೆ ಅವನ ಸ್ವರದ ಅರ್ಧದಷ್ಟು ಕ್ಷೀಣ ಸ್ವರದಿಂದ. ರಂಗದ ಮತ್ತೊಂದು ಬದಿಗೆ ಸ್ವರ ಮೇಳದ (ಕೋರಸ್) ವರು ಕುಳಿತು ಬೇಕಾದಲ್ಲಿ ವಿಷಯದ ಭಾವನೆಯನ್ನು ಬಲಪಡಿಸಲು ಪಲ್ಲವಿಗಳನ್ನು ಹಾಡುತ್ತಾರೆ. ಉತ್ತರ–ಪ್ರತ್ಯುತ್ತರಗಳಿರುವೆಡೆಯೂ, ಈ ಸ್ವರ ಮೇಳದವರು ಒಂದು ಪಾತ್ರದ ಮಾತನ್ನು ನುಡಿಯ ಬಹುದು.

ರಂಗದಮೇಲೆ, ಹಿನ್ನೆಲೆಯಲ್ಲಿ ಒಂದು ಬಿಳಿಯ ಪರದೆ ಇದೆ. ಇದರ ಮುಂದೆ ವಿವಿಧ ಅಭಿನಯಗಾರರು ಬಂದು, ವಿವಿಧ ದೃಶ್ಯಗಳನ್ನು ಗೀತದ ಅರ್ಥಗಳಿಗೆ ಅನುಗುಣವಾಗಿ ಅಭಿನಯಿಸುವರು. ಇದನ್ನೇ ಛಾಯಾ ರೂಪಕವಾಗಿ ಮಾರ್ಪಡಿಸಲೂ ಬಹುದು. ಬಿಳಿಯ ಪರದೆಯನ್ನು ರಂಗದ ಮಧ್ಯಭಾಗಕ್ಕೂ ಸ್ವಲ್ಪ ಮುಂದೆ ಹೊಂದಿಸಿ, ರಂಗದ ಅತೀವ ಹಿಂಗಡೆಯಿಂದ ಪರದೆಯ ಮೇಲೆ ಬೆಳಕುಬಿಟ್ಟು, ನಟರು ಪರದೆ ಹಿಂದೆ ಅಭಿನಯಿಸಬೇಕು. ನಟರ ನೆರಳೇ ಈ ರೀತಿಯ ರೂಪಕದಲ್ಲಿ ಭಾವನೆ ವ್ಯಕ್ತಪಡಿಸುತ್ತದೆ.

ಮೊದಲ ದೃಶ್ಯ—ನಮ್ಮ ಇಂದಿನ ಹಳ್ಳಿ; ಎರಡನೆಯದರಲ್ಲಿ ನಮ್ಮ ನಗರವನ್ನು ನಾವು ನೋಡುತಿದೇವೆ. ಮೂರನೆಯದು ನಮ್ಮ ಮುಂದಿನ ಮಾರ್ಗ. ತನ್ನ, ತನ್ನವರ, ತನ್ನ ವರ್ಗದ ಕಟ್ಟುಗಳಿಗೆ, ದಾಕ್ಷಿಣ್ಯಗಳಿಗೆ ಒಳಗಾದವರಿಂದ ಯಾವ ನೈಜ ಸೇವೆಯೂ ಸಾಧ್ಯವಿಲ್ಲ. ದೇಶದ, ಮಾನವನ ಸ್ವಾತಂತ್ರ್ಯ ಹೋರಾಟದಲ್ಲಿ ಈ ದಾಕ್ಷಿಣ್ಯಗಳು ಇಂದಿನ ಪ್ರಮುಖ ರಾಷ್ಟ್ರೀಯ ಪಕ್ಷಗಳ, ಅವುಗಳ ಮುಂದಾಳುಗಳ ಸೇವೆಗೆ ತಡೆಗಳಾಗಿವೆ. ಕೂಲಿಗಾರ, ಹೊಲ ನೆಲವಿಲ್ಲದ ರೈತನಿಗೆ ಈ ಹೋರಾಟದಲ್ಲಿ ಕಳೆದು ಕೊಳ್ಳಬೇಕಾದುದು ಯಾವುದೂ ಇಲ್ಲ; ಅವನನ್ನು ಭಂದಿಸಿದ ಸಾಮಾಜಿಕ, ಧಾರ್ಮಿಕ, ರಾಜಕೀಯ ಸಂಕಲೆಗಳು ಮಾತ್ರ! ಇವರು ಮಾತ್ರವೇ ಸ್ವಾತಂತ್ರ್ಯ ಸಾಧಿಸಬಲ್ಲರು. "ಭೂಮಿಯಲ್ಲಿ ಬಡವರ ಸ್ವರ್ಗ" ರಚಿಸಬಲ್ಲರು. ದೇಶದ ಮುನ್ನಡೆ ಬಡವರ ಮುಂದಾಳುತನದಲ್ಲಿ ಸಾಧ್ಯ. ಇದೇ ಭಾರತ ಶಕ್ತಿ!

— ಲೇಖಕ.

# ಆತ್ಮ ಶಕ್ತಿ



ರಂಗದಲ್ಲಿ ಬೆಳಕು ಅತ್ಯಲ್ಪವಿದೆ. ಅದು ಕ್ರಮವಾಗಿ ಹಾಡುಸಾಗಿದಂತೆ ಬೆಳೆಯುತ್ತಾ ಬರುವುದು. ಸೂರ್ಯನ ಉದಯದ ಚಿತ್ರ ಕಣ್ಣಿಗೆ ಕಟ್ಟಿದಂತಾಗುವುದು. ಬೆಳಕು ಬೆಳೆದು, ರಂಗವೆಲ್ಲ ಬೆಳಕಾಗುತ್ತದೆ. ಸುಪ್ತ ಜಗತ್ತು ಎಚ್ಚರವಾಗುತ್ತಿದೆ.

ನೋಡಲ್ಲಿ ದಿನಮಣಿಯು ಜಗಕೆ ಬೆಳಕೀಯಲಿಕೆ
ಮೇಲೇರಿ ಬರುತಿಹನು ದಿನಪನಾಗಿ,
ಗಣನೆಗೆಟಕದ ದಿನದ ಕಂತೆ ದೊರೆತಿದೆ ಜಗಕೆ
ಮೂಡಿ ಮುಳುಗುವದಿವಸ ಗೈಮೆಯಾಗಿ.

ಯುಗ ಬಂದು ಸಂದಿಹುದು, ಜಗವೆ ಬದಲಾಗಿಹುದು
ಮಾನವನು ಮಾನವನೆ ಆಗಿದ್ದನು.
ಏರಿದವನಿಳಿಯಬೇಕಂತೆ! ಮಾನವನುಳಿದು
ನರಕುರಿಯದಾಗಿಹನು; ಇಳಿದಿರುವನು.

ಕಾಲಚಕ್ರವೆ ತಿರುಗೆ ಬರಲದಕೆ ಏರಿಳಿತ
ಜಗಕೆ, ಜನಜೀವನಕೆ, ಬಾರದೇನು?
ರಥಿಕನಿಗೆ ಪಥದರಿವು ಬರದಿರಲು, ಆ ದಲಿತ
ಜೀವನವು ಬದಲಿಕೆಗೆ ಬರುವದೇನು?

ಕಾಲ ಜನಜೀವನವಿಚಾರ, ಜಗತೀವಲಯ
ಬದಲಾಗೆ ಮಾನವನು ತಿಳಿದುದಿಲ್ಲ;
ತನ್ನ ತಂಡವು ಬದಲೆ, ತಾಬದಲೆ ಒಪ್ಪದಿರೆ
ಆತಗುಳಿವದು ಜಗದಿ ಶಕ್ಯವಿಲ್ಲ.

ಬೆಳಗಾಯ್ತು, ಹಳೆಯಕಾಲವದಿನ್ನು ಉಳಿದಿಲ್ಲ
ಎದ್ದೇಳು! ಹೊಸತಾಗಿ ಹೊಸತ ಬರಿಸು.
ರವಿಯ ಬೆಳಕಿನ ಬೆಳಗು ಬೆಳೆದಂತೆ ಮನವೆಲ್ಲ
ಹೊಸ ಭಾವ ಚೇತನಗಳನು ತುಂಬಿಸು.

ರಂಗದ ಎಡಬದಿಯಿಂದ, ಎತ್ತುಗಳನ್ನು ನೇಗಿಲಿಗೆ ಹೂಡಿದ ರೈತನು ಉಳುವ ದೃಶ್ಯ. ರೈತ ಮೆಲ್ಲನೆ ರಂಗದ ಬಲಬದಿಗೆ ಸರಿಯುತ್ತಿದ್ದಾನೆ.
ಬಿಳಿದಾದ ಪರದೆಯ ಹಿಂದೆ ನೆರಳಿನ ದೃಶ್ಯವಿದು.

ಓಹ್ರೋಽ ಓಹ್ರೋಽ
ಓಹ್ರೋ ಸರದಲಿ ಅಡಕವಾಗಿಹುದು
ಸಪ್ತಸರದ ಗಾನ.... ಓಹ್ರೋಽ
ಓಹ್ರೋಽ.... ನುಡಿಗಾನಽ....

ಯುಗ ಯುಗಗಳು ಬಂದುವು ತಾ ಸಂದುವು
ಸಾಮ್ರಾಜ್ಯಗಳವು ಹುಟ್ಟಿ ಸತ್ತುವು
ಧರ್ಮ ಧರ್ಮಗಳು ಹರಡಿ ಹರಿದುವು
ಮಾನವ ಸಂತತಿ ಜನಿಸಿ ಅಳಿದುವು
ಬಾಳಿ ಉಳಿದುದು ಏನಿಲ್ಲ,
ಅನ್ನ ಧರ್ಮಕೆ ಅಳಿವಿಲ್ಲ!

ಯುಗ, ಸಾಮ್ರಾಜ್ಯ, ಧರ್ಮ, ಜನತೆಗಳ
ಚಿತ್ರ ಚಿತ್ರಗಳು ಭಾರತದಂಗಳ
ರಂಜಿಸಿ ಅಂಜಿಸಿ ಮೆರೆದುವು ಅವುಗಳ
ಬಾಳಿಸಿ ಕಂಡೆ ಹುಟ್ಟು ಸಾವುಗಳ
ಆದರು ಧರ್ಮವ ಬಿಡಲಿಲ್ಲ
ನಿನ್ನ ಧರ್ಮಕೆ ಕೊನೆಯಿಲ್ಲ.

ಭಾರತಕನ್ನವನೀವ ಧರ್ಮಜ
ನಿನ್ನನುಳಿದರಿಲ್ಲವು ಭಾರತ ನಿಜ
ನೀ ಹೃದಯವು ಭಾರತ ಭೂಮಿಯದು
ಇಲ್ಲವಳಿಗೆ ಇದೊ ನಿನ್ನನ್ನುಳಿದು
ರೈತರೆ ಭಾರತದರಸುಗಳು
ಹಿಂದಿನ ಮುಂದಿನ ಉಸಿರುಗಳು.

ಭಾರತ ಭಾಗ್ಯದ ಉದಯವಾಗುತಿದೆ
ರೈತರ ಕೂಟವ ಕಹಳೆ ಕರೆಯುತಿದೆ
ಎಲ್ಲರು ಮುಂದಕೆ ನಡೆದು ಸರ್ವೋದಯ
ಕಾಣಲು ಬನ್ನಿರಿ – ಆಗಲಿ ಉದಯ
ಇಂದಿನ ನೀತಿಯ ಪ್ರಳಯವದು
ಕಾದಿದೆ ಬಯಸಿರಿ ಸ್ವಾಗತವ.

ಧನಿಕ–ಬಡವ, ಬಲಯುತ–ಬಲಹೀನ
ಅರಸ–ಆಳು, ದನಿ–ಒಕ್ಕಲವೆನ್ನುವ
ಭೇದವ ನಳಿಸಿ ಸಮತೆಯ ತರುವ
ಪ್ರಳಯ ತಂದು ಸಗ್ಗವನಿದೂ ರಚಿಸುವ
ಕಾಲವು ಹತ್ತಿರ ಬಂದಿಹುದು
ಉಳಿದಿದೆ–ನೀವೊಂದಾಗುವುದು.

ಉಳುಮೆಯ ದೃಶ್ಯ ಮರೆಯಾಗುವುದು. ರಂಗದ ಬಲಬದಿಯಿಂದ ರೈತ ಸ್ತ್ರೀ ಪುರುಷರು ಕುಣಿಯುತ್ತಾ ಬರುವರು. ರೈತರ ನಿತ್ಯ ಜೀವನದ ನೃತ್ಯ !

ಸುಗ್ಗೀ– ಸುಗ್ಗೀ–
ನಮ್ಮ ಜೀವನದ ಸುಗ್ಗಿಯ ಕಾಲ ‖ ....ಸುಗ್ಗೀ....

ಭೂಮಿ ತಾಯಿಯು ; ಮಕ್ಕಳು ನಾವು
ತಾಯಿ ಯಾವಳು ಬೆಲ್ಲ–ಬೇವು .
ಉತ್ತರೆ ತುತ್ತು ! ಬಿತ್ತಿರೆ–ಮುತ್ತು
ಉತ್ತು ಗೇದರಿದೆ ಮುತ್ತಿನ ತುತ್ತು.

ಬೆಳೆ ಭಾಗ್ಯದ ಕೈ ಬಿತ್ತಲಿ ಭತ್ತ
ನಮ್ಮ ದುಡಿಮೆ ನಮಗೀಯಲಿ ತುತ್ತ
ಬಂದರೆ ಮಳೆ ! ದೊರೆವುದು ಬೆಳೆ
ಬೆಳೆಯಿದ್ದರೆ ಬಳಗಕೆ ಚಿನ್ನದ ಬಳೆ.

ಬಿತ್ತಿದ ಬೀಜವ ಕಾದರೆ ಅಗೆಯು
ಹೆತ್ತ ಮಕ್ಕಳ ಸಲಹಲು ನಗೆಯು
ಹಕ್ಕಿ ಹಾತೆಗಳು ಕಾಡು ಪ್ರಾಣಿಗಳು
ಬಾಲ್ಯದ ತೊಡಕನು ತಡೆವರೆ ಬೆಳೆಯು.

ಚಿನ್ನ ಬೆಳೆದಿದೆ! ಚಿನ್ನ—ಅನ್ನ
ಬತ್ತದ ಗೊಂಚಲು, ಬಾಳಿನ ಬನ್ನ,
ಕುಯ್ಯುವ ಒಟ್ಟು ಪಡೆಯುವ ಹಿಟ್ಟು
ದೇಶಕೆ ಕೊಡುವ ಹಿಟ್ಟು—ಒಟ್ಟು.

ಬಾಳಿನ ಹೋರಾಟವೆ ಈ ಭತ್ತ
ತಾಯಿಯುಳಿವಳು ಮಕ್ಕಳನಿತ್ತ
ಹೆತ್ತವಳಿಲ್ಲ ಮಕ್ಕಳಿ ಬೆಲ್ಲ
ಕಾಲದ ಮಂಚ ಬಿಡುಗಡೆಗಿತ್ತ.

ಜಾಸಿಗಳುಳಿವರು ಮೂಢರನಂತ
ಹಾರಿಸಿ ಜಳ್ಳು! ಬರಲಿ ವಸಂತ.
ಉಳಿದುದು ಅನ್ನ ಉಳಿದರೆ ಚಿನ್ನ
ಉತ್ತಮ ಉಳಿವದೆ ಹೆತ್ತವರಂತ.

ಉತ್ಸಾಹದ ನೃತ್ಯ ತಟ್ಟನೆ ನಿಂತು ಬಿಡುವುದು. ಭಯ—ಭೀತಿ—ಅಚ್ಚರಿಗಳಿಂ ರೈತರು ರಂಗದ ಎಡಬದಿಗೆ ನೋಡುತ್ತಾ—ಬಲಬದಿಗೆ ಒಂದೆ ಸರಿದು ನಿಲ್ಲುವರು ನಿಶ್ಶಬ್ದ! ಕಳೆಯಿಲ್ಲ! ಆನಂದದಿಂದ ನಲಿಯುತ್ತಿರುವವರು ಬೆಕ್ಕಸಬೆರಗಾಗಿದ್ದಾರೆ

ಉತ್ತಮವು ಉಳಿದರೇ ಹೆತ್ತವರ ಅಂತಾ।
ಹೊಟ್ಟು ಉಳಿದಿದ್ದರೇ ಜನತೆಯಾ ಅಂತಾ ॥

ಏನಾಯ್ತು? ಮಂಗಲಕಮಂಗಲವು ಬಂದಿತೇ
ನಲಿವೇಕೆ ನಿಂತಿಹುದು ಕಾಲುಳುಕಿತೇ
ಏನಾಯ್ತು? ಏನಲ್ಲಿ! ಜವನ ಕರೆ ಬಂದಿತೇ
ಸುಖ ಸಂತಸಗಳಳಿವು ಅಲ್ಲಿ ಬಂತೇ?

ದೀಪಾವಳಿಯ ಮಂಗಳೋಕುಳಿಯ ದಿನದಂದು
ಮರಣವಾರ್ತೆಯು ಮನೆಯ ತಲಪಿದಂತೆ
ಸರಸ ಸಲ್ಲಾಪ ರತಿಯಾರ್ಚನೆಯ ಕೇಳಿಯದು
ಕದದ ತೆರೆವಾಟಕ್ಕೆ ಅಡಗಿದಂತೆ.

ದೇವನರ್ಚನೆ ನಡುವೆ ಹಾವು ಹರಿದಾಡಿದೊಲು
ಔತಣದ ಕಾಲದಲಿ ಮರಣವಾದಂತೆ
ವಿಜಯವಾರ್ತೆಯ ಕೇಳಿ ಅರಸನೇ ಮಡಿದವೊಲು
ನಲಿವಾಗ ನರ್ತಕಿಯ ಕಾಲುಳುಕಿದಂತೆ.

ಕುಂಟನನು ಕುಣಿವಂತೆ, ಚಾಗಿಯಲಿ ಜೀವನದ
ನೆನಹ ಹುಟ್ಟಿಸಿ ಕುರುಡನಲಿ ಬೆಳಕಿನಾಶೆ
ತೋರಿ ಜೀವಚ್ಛವದಿ ಉತ್ಸಾಹ ತುಂಬಿದಾ
ಒಲವು ಅಳಿಯಿತು ಮೌನ ಹರಡಿ ನಿಂತು.

ಇರಬಹುದು! ಅಹುದು! ನಿಜ! ಮಗುವನೊಯ್ಯಲಿಕೆಂದು
ಬಂದಿಹನು–ದೂತನದೊ–ಜವನ ದೂತ!
ಬಾಳ ಬೆಳಕೆಂದೆಣಿಸಿ ದುಡಿದ ಜೀವಿಗೆ ಇಂದು
ಉಂಬ ಆಶೆಯುದಿಲ್ಲ; ನರನೆ ಆತ?

ಬಡವರ ಅನ್ನವನ್ನು ಸೆಳೆದು ತಿಂದುವರ ಕುರುಹನ್ನು ಪ್ರಕಟಿಸುವ ದೇಹದ ಜಮೀನ್‌ದಾರ. ಅವನ ಹಿಂದೆ ಧರ್ಮದ ಆಧಾರನಾದ ಶಾಸ್ತ್ರಿ. ಮೂರನೆಯದಾಗಿ ಪೋಲೀಸ್ ಒಬ್ಬ. ಇವರ ಹಿಂದೆ ಬುಟ್ಟಿಸಹಿತ ಇಬ್ಬರು ಕೂಲಿಗಳು. ಗಂಭೀರತೆಯಿಂದ ಇವರು ರಂಗವನ್ನು ಎಡ ಮಗ್ಗುಲಿಂದ ಪ್ರವೇಶಿಸುವರು. ಜಮೀನುದಾರ ಮುಂದೆ ಬಂದು ಒಕ್ಕಲಿಗರಿಗೆ ತನ್ನ ಬರವನ್ನು ತಿಳಿಸುತ್ತಾನೆ.

ಜಮೀನ್‌ದಾರ

ನಿನ್ನ ಪೂದೋಟವಲಿ ನೀ ಬೆಳೆಸಿ ಅರಳಿಸಿದ
ಸುಂದರ ಸುವಾಸಿತಲರನು ಕೊಯ್ಯಲೆಂದು

ಆದರ ಕಂಪನು ಪಡೆದು ; ಮೇಲೆತ್ತಿ ಮುದ್ದಿಸುತೆ
ನನ್ನ ಮುಡಿಯಲಿ ನಾನೆ ಧರಿಸಲೆಂದು....

ನೀ ಆಳು, ನಾನು ದನಿ, ನನ್ನ ಭೂಮಿಯ ಕಾಳು
ನನ್ನರಣವೀಯುವುದೆ ನಿನ್ನ ಋಣವು.
ಅನ್ನ, ಗೈಮೆಯು, ನೆಲವನಿತ್ತೆ – ನಿನ್ನಯ ಬಾಳು
ನನ್ನದಿದೆ, ಈ ದುಡಿತ ನನ್ನ ಮೇವು !

## ರೈತ

ಉಂಡಿಲ್ಲ, ಉಟ್ಟಿಲ್ಲ, ದುಡಿದು ತಂದೆವು ಕಣಜ
ಉಂಬಷ್ಟು ಉಳಿಸಿ ನೀವೊಯ್ಯಬಹುದು
ಗೇದರುಂಟೈ ಹೊಲದಿ, ಬೆಳೆ-ಅನ್ನ-ಈ ಕಣಜ
ಗೈಮೆ ಇಲ್ಲದೆ ಇರಲು ಬಂಜರಹುದು !

## ಶಾಸ್ತ್ರಿ

ನಿನಗನ್ನವಿತ್ತವಗೆ ಎರಡೆಣಿಸ ಬೇಡ ನೀ
ಋಣಕೆ ಕಟ್ಟಾಗದಿರು, ಪಾಪವದುವು.
ಪೂರ್ವಜನ್ಮದ ಪಾಪಗಳ ಫಲವನುಂಬೆ ನೀ
ಪುಣ್ಯದಿಂ ಬಂದಿಹುದು ಈ ಸಂಪದ

## ರೈತ

ದುಡಿದು ಬೆವರಿಳಿಸಿ ಬಿಸಿಲಲಿ ಬಳಲಿದಾ ಜೀವಿ
ಹಿಡಿಕೂಳದಿಲ್ಲದೆ ನರಳಬೇಕೆ ?
ಜಗಕೆ ಅನ್ನವನೀವ ರೈತ ನೇಗಿಲಯೋಗಿ
ಅನ್ನ ಬಟ್ಟೆಗಳಿರದೆ ಬಳಲಬೇಕೆ ?

## ರೈತನ ಮಡದಿ

ಒಬ್ಬ ಜೀವಿಗೆ ಸುಖವನೊದಗಿಸಲು ನೂರಾರು
ಮಂದಿ ಸಂಕಟಪಟ್ಟು ಸಾಯಬೇಕೆ ?

ಮಾನವನು ಮಾನವಗೆ ಬಾಗಿ ಜೀವನ ಮಾರಿ
ತನ್ನ ತಾ ಮರೆತು ದಾಸ್ಯತೆಯಲಿರಬೇಕೆ ?

**ಶಾಸ್ತ್ರಿ**

ನಮ್ಮ ಕೈಬೆರಳುಗಳು ಎಲ್ಲವೊಂದಾಗಿಲ್ಲ
ಬೆಳವಣಿಗೆ ಬಲಗಳೆಲ್ಲವು ಒಂದೆಯಲ್ಲ
ಒಂದೆ ದೇವನ ಮಕ್ಕಳೆಲ್ಲ ನಾವಿರೆ, ಸಲ್ಲ
ಕಾದಾಟ, ಅಂಗೈಯ ಬಲವದಿರಲಿ !

**ರೈತ**

ಒಂದೆ ದೇವನ ಮಕ್ಕಳೆಲ್ಲ ಈ ಜಗದತುಲ
ಜೀವಿಗಳಿರಲು ಏಕೆ ಮಣಿಯಬೇಕು ?
ಎಲ್ಲರೊಂದಾಗುವನಕವು ನಮ್ಮ ಆತ್ಮಬಲ
ಮುನ್ನುಗ್ಗಿ ಅನ್ಯಾಯ ಅಳಿಸಬೇಕು.

**ಜಮೀನ್‌ದಾರ**

ನಾನೊಡೆಯ, ನೀನಾಳು, ನಾ ಅನ್ನದಾತನಿಹೆ
ನಿನ್ನ ಜೀವನ ನನ್ನದಾಗಿರುವುದು.
ಧರ್ಮನೀತಿಗಳೆಲ್ಲ ನನ್ನ ಅಂಕೆಯಗಾಹೆ
ನನ್ನ ಸಿಡಿರಾಡುವಗೆ ಕೊನೆಯೆ ಬಹುದು.

ಪೋಲೀಸ್ ಮುಂದೆ ಬಂದು ರೈತನ ಕೈಗೆ ಬೇಡಿ ತೊಡಿಸಿ ರಂಗದ ಬಲಬದಿಗೆ ಸರಿಸಿ–ತಾನೂ ಅವನ ಬಳಿ ನಿಲ್ಲುವನು. ಜಮೀನ್‌ದಾರನ ಆಳುಗಳು–ಕಾಳು ತುಂಬಿ ರಂಗದ ಎಡ ಬದಿಗೆ ಹೋಗಿ, ಬರಿದಾದ ಬುಟ್ಟಿಯಿಂದ ಪುನಃ ಬರುತ್ತಾರೆ.

**ರೈತ**

ನನ್ನ ಅನ್ನವ ಪಡೆಯೆ ದಸಿಯೇಕೆ ದೊರೆಯೇಕೆ
ದೇವರನು ಕಾಣಲಿಕೆ ಗುರುಗಳೇಕೆ ?

ನಮ್ಮನೆಲ, ದೇವರುಗಳೆಲ್ಲ ಎಲ್ಲರದಾಗೆ
ಜಗದಿ ಧರ್ಮದ ನೈಜನೀತಿ ಬರದೆ?

## ರೈತನ ಮಡದಿ

ಒಂದೆ ದೇವನ, ಒಂದೆ ದೇಶದಾ ಮಕ್ಕಳಲಿ
ವಿವಿಧ ರೀತಿಯ ಭೇದ ಭಾವವೇಕೆ
ಧನಿಕನಿದ್ದರೆ ಬಡವ, ಧನಿಯಿದ್ದರೇ ಆಳು
ಇವರಳಿಯೆ ಬಡವರಾ ಅಳುವು ಬೇಕೆ ?

ಕಾಳು ಮುಗಿಯುತಲಿದೆ. ಕೂಲಿಗಳು ಕಾರ್ಯಸಾಗಿಸುತಿದ್ದಾರೆ. ಈ ದೃಶ್ಯದಿಂದ ತಡೆಯಲಾರದ ದುಃಖ ರೈತನಿಗಾಗುವುದು. ಅವನು ನಿಂತಲ್ಲೇ ಕುಸಿದ ಬೀಳುವನು. ಅವನ ಮಡದಿ ಅವನನ್ನು ಉಪಚರಿಸುವಳು. ಹಳ್ಳಿಯ ಬಾಳು !

ಎದ್ದೇಳು, ಹೋರಾಡು, ದಾಸ್ಯಶೃಂಖಲೆ ಕಡಿಯೆ
ನಿನ್ನ ನುಂಗಿದರಂತೆ ನೀನವರ ನುಂಗು
ಭಾರತದ ದಿವ್ಯ ಚರಿತೆಯನಿದೋ ನೀನರಿಯೆ
"ನೀ ಕರ್ಮವೆಸಗುವೆಯೊ–ನಿನಗಿಲ್ಲ ಹಂಗು"

ಹಗಲು ಕಳ್ಳರುಬಂದು ಹವಿಸನೆತ್ತುತಲಿಹರು
ನರರ ಕೊಲುವರು– ಹಿಂಸೆಗಂಜುವವರು.
ಧರ್ಮವನು ಮಾರುವರು, ವೇದಶಾಸ್ತ್ರವ ಸುಟ್ಟು
ಗೋರಿ ರಚಿಪರು ದೇವನನ್ನು ಸೆರೆಯಿಟ್ಟು.

ಎಂದೊ ಬೆಳಗಾಗಿಹುದು ಕಹಳೆ ಕರೆದಿಹುದಿನ್ನ
ಕೊಟ್ಟಿಲ್ಲ ನೀ ನಿನ್ನ ಬಂಧುಗಳಿಗನ್ನ.
ಇನ್ನುಳಿದ ಕಾಲ ಕಳೆದಷ್ಟಿಲ್ಲ ಎದ್ದೇಳು
ಬಂಧುಗಳಿಗಾಗಿ, ದೇಶಕ್ಕಾಗಿ ಬಾಳು.

ಹಗಲು ಮಮತೆಯ ತೋರಿ ರಾತ್ರಿಕದ್ದರು ನಿನ್ನ
ನಾಡ- ನುಡಿ-ಅಭಿಮಾನ-ಸ್ವಾತಂತ್ರ್ಯವ
ಸಕ್ಕರೆಯ ತುಂಡೆಂದು ತಿಂದು ತೇಗಿದೆ ನಿನ್ನ
ನಿರ್ಜೀವವೆಸಗುವಾ ಘೋರ ವಿಷವ.

ಕಾಳು ತುಂಬುವ ಕಾರ್ಯ ಮುಗಿಯಿತು. ದನಿ-ಕೂಲಿಗಳೊಡನೆ ಹಿಂತಿರುಗುವ. ಶಾಸ್ತ್ರಿ, ಪೋಲೀಸನು ತನ್ನ ಕೊಳ್ಳಿಯೊಡನೆ ಅವರನ್ನು ಹಿಂಬಾಲಿಸುವರು. ರೈತನ ಮಡದಿ, ದುಃಖದಿಂದ, ಕೈನೀಡಿ ಮೊರೆಯಿಡುತ್ತಾ ನೆಲದಮೇಲೆ ಬೀಳುವಳು

ಇದುವೆ ಇಂದಿನ ನೀತಿ
ಜಗದ ನ್ಯಾಯದ ರೀತಿ
ದುಡಿವ ಜೀವಿಯ ಭೀತಿಯಾಗಿರುವುದು.
ನರಗಳೇಳಿವೆ ಲಕ್ಷ
ಭಾರತದ ಬಲ ರಕ್ಷ
ಎಲ್ಲಕೂ ಇಂದಿಹುದು ಕೃಷ್ಣ ಪಕ್ಷ....

ರಂಗದ ಮೇಲಿನ ಬೆಳಕು ಕ್ಷೀಣಿಸುತ್ತಾ ನಂದುವುದು.

— ತೆರೆ —



# ದೇಹಶಕ್ತಿ



ನಗರದ ಚಿತ್ರ. ಸಂಸ್ಕೃತಿಯಿದೆ, ಆದರೂ ಇಲ್ಲದಂತೆ ಕಾಣಿಸುವ ಜಡ ಚಿತ್ರ. ಜೀವವಿದೆ ಆದರೂ ಜೀವಕಳೆಯಿಲ್ಲ. ಸುಖ–ದುಃಖಗಳು; ನಗು–ಅಳುಗಳು; ಹುಟ್ಟು–ಸಾವುಗಳಿಲ್ಲಿ ಒಂದರ ಹಿಂದೊಂದಾಗಿ ಬರುತ್ತಿವೆ. ಹಳ್ಳಿಯಲ್ಲಿ ಒಂದು ವಿಧವಾದ, ಒಂದು ರೀತಿಯ ದೃಶ್ಯವನ್ನು ನಾವು ಕಂಡಿದ್ದರೆ, ಪಟ್ಟಣದಲ್ಲಿ ಪಲವಾರು ಚಿತ್ರಗಳು ನಲಿವದನ್ನು ನೋಡಬಹುದು.

ಬೀದಿಯಲ್ಲಿ ಜನರು ಅತ್ತಿತ್ತ ಚಲಿಸುತ್ತಿದ್ದಾರೆ. ಭಟ್ಟರ ಇದಿರಾಗಿ ಹರಿಜನರೂ, ಮುತ್ತೈದೆ ಯಿದಿರಾಗಿ ವಿಧವೆಯೂ, ಕುಂಟನ ಇದಿರಾಗಿ ಕಾಲಿದ್ದೂ ವಾಹನದಲ್ಲಿ ಸಾಗುವವರನ್ನೂ ಕಾಣುತ್ತೇವೆ. ಎಲ್ಲೆಲ್ಲೂ ವಿಚಿತ್ರ, ಅಪ್ರಾಸಂಗಿಕ, ಅಪ್ರಬುದ್ಧ. ಆದರೂ, ಒಂದು ಜೀವವಿದೆ–ಜಂಜಾಟವಿದೆ, ಬಾಳು ಕಳೆದುದು ಅರಿವಾಗುವುದಿಲ್ಲ.

ಬೆಳಕು ಬಂತು, ಬೆಳಕು ಬಂತು
ಹೊಸತು ರೀತಿ ನೀತಿ ಬಂತು
ಸುಖದ ಸುಗಮ ದಾರಿ ಬಂತು
ಜನರ ಮಧ್ಯಕೆ.
ಜನರನೊಂದುಗೂಡಿ ಬಂತು
ಹಳ್ಳಿ ಮಧ್ಯಕೆ.

ಯಂತ್ರ–ತಂತ್ರ–ಗಾಡಿ–ವೋಡಿ
ನಗರ ನಾಗರಿಕತೆ ಜೋಡಿ
ಹಳೆಯದೆಲ್ಲ ಹೊಸತುಮಾಡಿ
ಬಂದಿತಿಲ್ಲಿಗೆ.
ಜನರ ತನ್ನ ಬಳೆಗೆ ದೂಡಿ
ತಂದಿತಿಲ್ಲಿಗೆ.

ಕರುಣೆ ಪ್ರೀತಿ ಬಂಧು ಭಾವ
ಸಂಸ್ಕೃತಿಯಲಿ ನೈಜ ಜೀವ
ಮಾನವತೆಯ ನಿಯಮ ತನವ
ಕಾಣೆವೆಲ್ಲಿಯು.
ಯಂತ್ರದಂತಃ ಜೀವನವ
ಕಾಂಬೆವೆಲ್ಲಿಯು.



ಕಲ್ಲ ಕೆತ್ತಿದರುಂಟು ಬಸದಿಯು, ಗೋಮಟ,
ಬಲ್ಲರ ಬರೆಹ, ಮಂದಿರವು.
ಕಲ್ಲೆಲ್ಲ ಹುಡಿಯಾಗಿ ಮರಳಾಗೆ ನದಿತಟ
ಕಲ್ಲದೆ ಮತ್ತೆಲ್ಲಿಗದುವು?

ಜಾತ್ರೆಯ ಜನ ನವರಾತ್ರೆಯ ಸಂತೋಷ
ಯಾತ್ರೆಯ ಜೀವನವೆಲ್ಲ
ಚಿತ್ರ ಚಿತ್ರಗಳಾಗಿ ತೋರಿಯಡಗುವವು
ಮರಣದ ಭಾವವದೆಲ್ಲ.

ಬೆಳಕದು ತುಂಬಿದೆ-ದಾರಿಕಾಣುವುದಿಲ್ಲ
ತಿಳಿವಿಲ್ಲ-ಶಾಸ್ತ್ರಗಳೆಲ್ಲ.
ಕಳೆಯಿಲ್ಲ ಜೀವದಿ-ಹರುಷ ಪೌರುಷವೆಲ್ಲ
ಅಳಿವಿಲ್ಲ ಬಾಳಿದುದಿಲ್ಲ.

ಆನಂದವರೆಗಳಿಗೆ ದುಃಖದಾಟದ ಒಳಗೆ
ಸುಖವು-ದುಃಖವು-ಸಮನೆ ನಗರದೊಳಗೆ
ಹಗಲಿರುಳು-ಸುಖದುಃಖ-ನಲ್ಮೆದ್ವೇಷಗಳೆಲ್ಲ
ಧರ್ಮಾಧರ್ಮದ ವೇಷ-ನಡತೆಯೆಲ್ಲ
ಸಿಹಿ-ಕಹಿ, ಬೇವು-ಬೆಲ್ಲ
ಸುಖ-ದುಃಖ, ಉಂಟು-ಇಲ್ಲ!

ಪೋಲೀಸನೊಬ್ಬ ಬೇಡಿ ತೊಡಿಸಿದ ಕೈದಿಯನ್ನು ಕರೆದೊಯ್ಯುತ್ತಿದ್ದಾನೆ.

ನೋಡು ನೋಡು ಬಂಧುವವನು
ಬಡತನದೆ ಬೆಂದ ನರನು
ಅನ್ನಕಾಗಿ ಕನ್ನವಿಕ್ಕಿ ಹೋಗುತಿರುವನು–ಸೆರೆಗೆ
ಸಾಗುತಿರುವನು.

"ನಿನ್ನ ಕೀಟ ನಿನ್ನ ಕಂಡು
ಹಸಿವು ಹಸಿವು ಎಂದುಕೊಂಡು
ಹಗಲು ಇರುಳು ಸೊರಗಿ ಕೊರಗಿ ಕರುಳ ಕಿತ್ತುದು–ನಿನ್ನ
ಕೊರಳಿಗಿತ್ತುದು.

ಹಸಿವು ಹಸಿವು ಎಂಬ ದಾಹ
ನಿನ್ನ ಕರುಳ ಕುದಿಸಿ ದೇಹ
ದಲ್ಲಿ ಮಿಂಚ ಮಿಂಚಿಸಿರಲು ತಾಣ ಹುಡುಕಿದೆ–ಕರುಳ
ಉಳಿಸಲೆಳಸಿದೆ.

ಅಲ್ಲಿ ಬೇಡ, ಇಲ್ಲಿ ಬೇಡ
ನಿಲ್ಲಬೇಡ ಕೂರ ಬೇಡ
ಮರಕೆ ಗಿಡಕೆ ಒರಗಬೇಡ ಎಂಬ ಕಟ್ಟಿಗೆ–ಬಡನ
ಕಟ್ಟುವಡೆದೆಯಾ ?

ತನಗೆ ತಾನು ಕದಿಯಲಿಲ್ಲ
ತಾನು ಅದನು ಮೆಲ್ಲಲಿಲ್ಲ
ಹೆಚ್ಚಿಗೇನು ಕದಿಯಲಿಲ್ಲ; ಮಡದಿ ಕೀಟಕೆ–ಒಂದು
ದಿನದ ಊಟಕೆ.

ಬಡವಗಿಂದು ಬಾಳಸಲ್ಲ
ಬಡವ ಬಲವ ಅರಿತು ಇಲ್ಲ
ಬೂದಿಮುಸುಕಿ ಉರಿಯಬಲ್ಲ ಬೆಂಕಿಬಡತನ–ಪೂಜ್ಯ
ಧರ್ಮ ಬಡತನ.

ದೃಶ್ಯ ಬದಲಾಗುವುದು ಕೈದಿಯು ಮರೆಯಾಗಲು ಅದೇ ಬದಿಯಿಂದ ಒಬ್ಬ
ಾಯಿ ಭಿಕ್ಷೆಗಾಗಿ ಕೈನೀಡುತ್ತಾ ಬರುತ್ತಿದ್ದಾಳೆ· ಸುತ್ತಲೂ ಹಸುಳೆಗಳು. ರಂಗ
ಿದಿರು ಬದಿಯಿಂದ ಸ್ತ್ರೀ ದೇಗುಲಕ್ಕೆ ಹೊರಟಿದ್ದಾಳೆ. ಹಿಂದಿನಿಂದ ಸನಾತನಿ ಪತಿ.

ಮಕ್ಕಳಿಲ್ಲೆಂದೀಕೆ ದೇಗುಲಕೆ ನಡೆಯುವಳು
ಕಾಣುವದ ಬಿಟ್ಟು ಕಾಣದುದ ಕೂಗೆ
ಮಕ್ಕಳನು ಸಲಹಲಾರದೆ ಸಾಗುತಿದೆ ಜೀವಿ
ಮಕ್ಕಳೇ ಬೇಕಿಲ್ಲ ಆ ತಾಯಿಗೆ.

ಕೈಗೆ ಬಂದುದ, ಕಣ್ಣ ಮುಂದಿಹುದ ಕಾಣದೆ
ತುಳಿದು, ಕಾಣದ ಪಡೆವ ಮೂಢರಿದಕೊ
ಲಂಚ ಪಡೆಯಲು ದೇವ ಧನಿಕ–ದಂಡಾಧಿಪನೆ
ಕುರುಡರಾ ಕುರುಬನವನೆಂಬರೇಕೊ.

ವೈರಾಗಿಯೊಬ್ಬನು ಇವರಿಗಿದಿರಾಗಿ ಬರಲುಅವನಿಗೆ ಗಂಡಸು ದಾನವಿತ್ತು ಮುನ್ನಡೆವ

ಆ ತಾಯಿ ಎಲುಬುಗೂಡಿನ ಜೀವಿ ಬಿದ್ದಿಹಳು
ಜೀವವಿದ್ದರು ಚೇತನವದೆಂಬುದಿಲ್ಲ
ಅತ್ತಿತ್ತ ಬಿದ್ದಿಹವು ಆರೇಳು ಹಸುಳೆಗಳು
ತಾಯೆಂಬ ಪ್ರೀತಿಯಾದರಗಳವಕಿಲ್ಲ.

ಮಾನವನ ರೂಪವಿದೆ ಮಾನವತೆ ಉಳಿದಿಲ್ಲ
ಉಸಿರಿದ್ದರೂ ಉಸಿರ ಕುರುಹದಿಲ್ಲ.
ಜನುಮವಿತ್ತಿಹ ದೇವ ಬಟ್ಟೆತೋರಲೆಇಲ್ಲ
ತೋರಿದ್ದ ಬಟ್ಟೆಯೂ ಮುಳ್ಳದೆಲ್ಲ.

ತಾಯ್ತನದ ಮೇಲ್ಮೆ ಅಭಿಮಾನ ಬಾಳಿನ ನೀತಿ
ಅಳಿದ ಲೋಕವು ಹೊಲಸ ಕೊಂಪೆಯಹುದು
ಆವಕಾಲಕೆ ಬಹದೊ ಇದತೊಳೆವ ಬಿರುಮಳೆಯು
ಅದ ಹೊರತು ಈ ಹಾಳು ಅಳಿಯದಿಹುದು.

ಈ ಚಿತ್ರ-ಭೀಕರ ಚಿತ್ರ-ಮೂಸುವ ಮೊದಲೆ ಇನ್ನೊಂದು ರೀತಿಯ ಭಿಕ್ಷಾಟನೆ. ಹೊಟ್ಟೆಗಾಗಿ ದುಡಿತ; ಅದರೊಡನೆಯೂ ಆನಂದ ಮತ್ತು ಕಲಾಸೇವೆ. ದೇವನ ಮಕ್ಕಳೇ ಕಾಲಕಸವಾಗಿರುವಾಗ ಕಲೆ ಬೀದಿಯ ಬಸವಿಯಾಗುವುದು ಅಚ್ಚರಿಯಲ್ಲ. ಅಲ್ಲಾದರೂ ಅದು ಉಳಿದಿದೆ! ಉಣ್ಣುವದಕ್ಕಾಗಿ ಬಾಳುವವರ ಮನೆಯಿಂದ ಹೊರಟಿದೆ. ಸಂಗೀತ-ಹಾಡು-ಗಳಿಗೆ ಅನುಗುಣವಾದ ನೃತ್ಯ. ಗಂಡು ಹಾಡಿನ ಚರಣದ ಮೊದಲರ್ಧ ಹೇಳಿ ಮುಗಿಸುವ ಹೊತ್ತಿಗೆ ಹೆಣ್ಣು ಚರಣದ ಉತ್ತರಾರ್ಧವನ್ನು ಎತ್ತಿಕೊಳ್ಳುವಳು. ಕುಣಿಯುತ್ತಾ ಹಾಡುವಳು. ಜೀವನ ನೃತ್ಯ.

ಚಂದ್ರವಂಶದ ಭೂಪ ದಶರಥಯೋಧ್ಯೆಯ
ನಾಳುತಿದ್ದನು ತ್ರೇತಯುಗದಿ
ರಾಮಚಂದ್ರನು ಹಿರಿ ಮಗನು, ಕಿರಿಯವರು
ಲಕ್ಷ್ಮಣ, ಭರತ, ಶತ್ರುಘ್ನ.

ಋಷಿ ವಿಶ್ವಾಮಿತ್ರ ಬಂದೆಂದ ರಾಕ್ಷಸ
ಜನರ ಕಾಟವು ಬಹಳಾಯ್ತು
ಬರಬೇಕು ಶ್ರೀರಾಮ ಯಾಗವ ರಕ್ಷಿಸೆ
ಎಂದರಸಗೆ ಆವ ನುಡಿದಾಯ್ತು.

ಮುದ್ದು ಮಗನ ಮೇಲೆ ಅರಸಗೆ ಮಮತೆಯು
ಒಪ್ಪಲಾರನು ಒಪ್ಪದಿರನು
ಉಭಯಸಂಕಟದಲ್ಲಿ ಬಿದ್ದು ದುಃಖವ ಪಟ್ಟು
ಕಳುಹಿದ ರಾಮ-ಲಕ್ಷ್ಮಣರ.

ಸೂರ್ಯ ಚಂದ್ರರಂತಃ ಮಕ್ಕಳ ಜತೆಗೂಡಿ
ಋಷಿ ನಡೆದನು ಮುಂದೆ-ಮುಂದೆ.
ಲೋಕದ ಕತೆ ಪರಲೋಕದ ಕತೆ ಹೇಳಿ
ಚಾಪವಿದ್ಯೆಯನರುಹಿದನು.

ರಕ್ಕಸರನ್ನಿರಿದಿಕ್ಕಿ ಅಹಲ್ಯೆಯ
ಶಾಪವ ನೀಗಿ ಕಾಪಾಡಿ
ಮುನ್ನಡೆದರು ಮಿಥಿಲೆಗೆ ಕೇಳಿ ಜನಕನ
ಕುವರಿಗೆ ಮದುವೆಯದೆಂದು.

ಹರನ ಬಿಲ್ಮುರಿದು ವರಿಸಿದನು ಶ್ರೀರಾಮ
ಹರಿಣಾಕ್ಷಿ ಜಾನಕಿಯನ್ನು
ಹರಹರ ಕರುಬಿದ ರಾಜರದೆಷ್ಟೊ
ಜಾನಕಿಗಾದ ಆನಂದವೆಷ್ಟೊ.

ಆಕೆ ಮರೆಯಾದಳು. ಕೂಲಿಗಳು ಆಕೆಗೆ ಕಾಸನ್ನೆಸೆವರು. ಧನಿಕ ಕೊಡಲಿಲ್ಲ.

ಬಾಳಲೆಂದುಣ್ಣುವವಗಿಲ್ಲ ಅನ್ನವದಿಲ್ಲ
ಉಣ್ಣಲೆಂದುಳಿವವಗೆ ಮೃಷ್ಟಾನ್ನವು
ತನಗಾಗಿ ಬಾಳಿ ದುಡಿವವಗಿಹುದು ಸುಖವೆಲ್ಲ
ಜನಕಾಗಿ ಬಾಳಿರಲು ಸಾವು-ನೋವು.

ಕೂಲಿಗಾರರು ಚಮ್ಮಟಿಕೆ ಹಿಡಿದು-ಸಾಲಾಗಿ ಬರುತ್ತಿದ್ದಾರೆ. ಈ ಸಾಲು ಒಮ್ಮೆ ರಂಗವನ್ನಿಡೀ ಹಾದು ಹೋಗಿ ಪುನಃ ಬರುತ್ತಲಿದೆ. ಅಂದರೆ ಹಿಂದಣ ತೆರೆಗೆ ಸುತ್ತು ಬರುವರು. ಇದರಿಂದ ನೂರಾರು ಜನರಿದ್ದಂತೆ ಭಾಸವಾಗುವುದು.

ನೋಡುತ್ತ, ಹರಡಿಕೊಂಡಿದ್ದ ಹರಳುಗಳೆಲ್ಲ
ಒಂದಾಗಿ ನಿಂದಿಹವು ಹಾರವಾಗಿ
ಹುಡಿಯಾಗಿ ತುಳಿತಕೊಳಗಾಗಿದ್ದ ಧೂಳೆಲ್ಲ
ಗೋಡೆಯಾಗಿವೆ ಒಂದು ಮುದ್ದೆಯಾಗಿ.

ತುಳಿತಕ್ಕೆ ಹುಡಿಯಾಗಿ, ತಾಡನದ ನೆಲೆಯಾಗಿ
ಸುಲಿಗೆ ಸೂರೆಯಕೊಳ್ಳೆಯಾಗಿ ನಿಂದ
ಬಡಜನತೆ, ರೈತ–ಕೂಲಿಗಳೆಲ್ಲ ಒಂದಾಗಿ
ತಲೆಎತ್ತಿ ನಡೆಯುವರಿದೇನಿದಂದ?

ಎರಡನೇ ಬಾರಿ ಕೂಲಿಗಾರರು ರಂಗದಮೇಲೆ ಪ್ರವೇಶಿಸುವರು.
ತಲೆಎತ್ತಿ ನಡೆಯುತ್ತಿದ್ದಾರೆ.

ಜನ್ಮಸಿದ್ಧ ಹಕ್ಕು
ಇದಕೊಡಿ
ಇದು ನಮ್ಮಯ ಹಕ್ಕು!

ದುಡಿತಕೆ ಮಿತವೊಂದಿರಲೇ ಬೇಕು
ದುಡಿತಕೆ ಸರಿ ಕೂಲಿಯು ಸಿಗಬೇಕು
ದುಡಿಮೆಯ ಭದ್ರತೆ ನಮಗಿರಬೇಕು
ದುಡಿತ ನಮ್ಮ ಹಕ್ಕು.

ಜೀವನ ಸಾಗಿಸೆ ಬೇಕಿಹ ಕೂಲಿ
ಇಲ್ಲದಿರೇತಕೆ ನಮಗೀ ಕೂಲಿ
ದುಡಿವೆವು ಅದಕಿಹ ಬೆಲೆಯದು ಬರಲಿ
ಇದು ನಮ್ಮಯ ಹಕ್ಕು.

ದವಸದ ಬೆಲೆಯದು ಮಿತಿಮೀರಿಹುದು
ದೊರೆವ ಕೂಲಿ ಅರೆ ಹೊಟ್ಟೆಗು ಬರದು
ಕೂಲಿ ಹೆಚ್ಚಿಸಿರಿ, ಕೊಲದಿರಿ ಹುರಿದು
ಇದೆ ನಮ್ಮಯ ದಿಕ್ಕು.

ಮೂರನೇ ಬಾರಿ ಕೂಲಿಗಾರರ ಪ್ರವೇಶ. ರಂಗದ ಬಲಬದಿಯಿಂದ ಕಾರ್ಖಾನೆಯ ಮ್ಹಾಲಿಕ, ಮ್ಯಾನೇಜರ್, ಪೋಲೀಸ್ ಇವರ ಪ್ರವೇಶ.

ದುಡಿಯುವೆವು ಹಗಲಿರುಳು ಕಾಲಕ್ಕೆ ಮಿತಿಯಿಲ್ಲ
ಬಾಡಿ ಕಂದಿದೆ ಇದೋ ದುಡಿವ ಜೀವ
ಸಂಸಾರ ಸಾಯುತಿದೆ. ಉಣಲು ಅನ್ನವದಿಲ್ಲ
ದವಸಕೂಡಿದ ಧನಿಕಗಿಲ್ಲ ದೇವ

ದುಡಿವೆವಿದೊ ಬೆವರಿಳಿಸಿ, ಮಡದಿಮಕ್ಕಳನುಳಿಸಿ
ದುಡಿತಕನುಗುಣವಾದ ಕೂಲಿ ಕೊಡಿಸಿ
ಅನ್ನಕಳ್ಳರು ಬಂದು–ದವಸವಿದೆ ತಲೆಮರೆಸಿ
ನೀವಿದೋ ಕೊಲ್ಲದಿರಿ, ಕೂಲಿಮರೆಸಿ.

ಕಾರ್ಖಾನೆ ಒಡೆಯ

ದುಡಿತಕನುಗುಣವಾದ ಕೂಲಿ ಸಲ್ಲುತ್ತಿಹುದು
ಅದಕಿಂತಧಿಕ ಕೊಡಲು ಸಾಧ್ಯವಿಲ್ಲ
ಅನ್ನಕೊಡುವಾ ಹೊಣೆಯು ನನ್ನದಲ್ಲವು ಅದು
ನಿಮ್ಮದಿದೆ; ನಾನದಕೆ ಭಾಗಿಯಲ್ಲ.

ನಿಮ್ಮ ಈ ಕೂಗಾಟ ನನಗಿಲ್ಲಿ ಬೇಕಿಲ್ಲ
ಗಿರಣಿ ಮುಚ್ಚಲು ನಿಮ್ಮ ಆಟವಿಲ್ಲ
ಗೊಂದಲಕೆ ಗುಂಡುಗಳ ಹಾರವಿಲ್ಲದೆ ಇಲ್ಲ
ದುಡಿವ ಕೀಟಗಳಿಗೆ ಮಣಿವನಲ್ಲ.

ಕೂಲಿಗಳು

ದುಡಿತವಿರದಿರೆ ಗಿರಣಿಯದಿಲ್ಲ
ಗಿರಣಿ ಇಲ್ಲದಿರೆ ದರ್ಪವದಿಲ್ಲ
ನಮ್ಮ ದುಡಿತ ನಿಮಗಿತ್ತಿದೆ ಎಲ್ಲ
ಇದನರಿತಿರಬೇಕು.

ಬಡವರು, ರೈತರು, ಕೂಲಿಗಳೆಲ್ಲ
ಒಂದಾದರೆ ಈ ಕೊಳ್ಳೆಯೆ ಇಲ್ಲ
ಆಗಲಿಕ್ರಾಂತಿ, ಜಯವಿರದಿಲ್ಲ
ಕ್ರಾಂತಿಗೆ ಜಯಬಹದು.

ದುಡಿವವಗೆ ಉಳಿವಿಲ್ಲ ದುಡಿಸುವರ ರಾಜ್ಯದಲಿ
ನ್ಯಾಯಕ್ಕೆ ಬೆಲೆಯಿಲ್ಲ, ಅನ್ಯಾಯದಲಿ
ಮಾನವನ ಮಾನವನು ತಿಂಬ ರಕ್ತವ ಹೀರಿ
ಅಳಿದಿಹುದು ಎಲ್ಲರೊಂದೆನುವ ದಾರಿ.

ಕೂಲಿಗಾರರ ಮುಂದಾಳುವಿನ ಸೆರೆ–ಕಳವಳ.

ಅನ್ನ ಕೇಳಿದ ಜೀವಿ ಅನ್ಯಾಯವ ಗೈದನೇ
ಅವನೇಕೆ ದಾಸನಾ ದಾಸನಾದ ?
ಶಿರವುಳಿದರೂ ಮುಂಡ ಮುನ್ನಡೆಯಲಾರದೇ ?
ಕೇಳಿಸದೆ ಸ್ವಾತಂತ್ರ್ಯ ದಿವ್ಯನಿನದ ?

ಒಂದಾಗಿ, ತಲೆಯೆತ್ತಿ, ಮುನ್ನಡೆದು ಹೋರಾಡಿ
ಕೊನೆಯ ಕಾಳಗದ ಪೀಠಿಕೆಯು ಇದುವು
ಸೋಲು–ಬೇನೆಗಳೆಲ್ಲ, ಬಂದರೂ ಅದ ದೂಡಿ
ಮುನ್ನಡೆಯೆ ಜಯಬಹದು ನಮ್ಮ ಜಯವು.

ಧೈರ್ಯದಿಂದ ಕೂಲಿಗಳು ಒಂದು ಹೆಜ್ಜೆ ಮುನ್ನಡೆಯುವರು; ಧನಿ–ಇತರರು ಹಿನ್ನಡೆವರು. ಪೋಲೀಸರು ಗುಂಡು ಹಾರಿಸುವರು. ಕೂಲಿಗಳು ಬೀಳುವರು.

ವೀರಮಡಿಯುವನೊಮ್ಮೆ
ಹೇಡಿ ದಿನ ದಿನವೂ
ಜನಕಾಗಿ ನಾವಿಹೆವು
ಧನಿಕ ತನಗಾಗಿ

ಜನ–ದೇಶಗಳಿಗಳಿಯೆ
ವೀರತನವೂ
ತನಗಾಗಿ ತಾನಳಿಯೆ
ಹೇಡಿತನವೂ

ಬೆವರಿನಾ ಬೆಲೆ ಬರಲಿ
ಇದು ನಮ್ಮ ಹಕ್ಕು
ಮಾನವತೆ ನಮಗಿರಲಿ
ಇದು ನಮಗೆ ಬೇಕು

ಕೊಲೆಯಾಗಲಿದೊ-ಇಂದು ನಿಮ್ಮದಿನವು!
ಉಳಿದಿಹೆವು-ಇನ್ನಧಿಕ–ನಿಮಗದುವೆ ಅಳಿವು !!

ಎದ್ದುನಿಂತ ಕೂಲಿಗಳ ಮೇಲೆ ಪುನಃ ಗುಂಡು ಹಾರುವುದು. ಅವರು ಬೀಳುವರು. ಸೆರೆಹಿಡಿದವನನ್ನು ಪೋಲೀಸರು ಕರೆದೊಯ್ಯುವರು. ಯಜಮಾನನೂ ಇವರ ಹಿಂದೆ ಗಂಭೀರವಾಗಿ ನಡೆವ. ನಿಶ್ಶಬ್ದ ! ಬಿದ್ದವರಲ್ಲಿ ಗಾಯಗೊಂಡವನೊಬ್ಬತೆವಳಿ ಕಷ್ಟದಿಂದ ಎದ್ದು ಕುಳಿತು, ಹರಿದ ಚಿಂದಿಯನ್ನು ರಕ್ತದಲ್ಲದ್ದಿ, ಹಿಂಡಿ, ಬಿಡಿಸಿ ನೋಡುವ–ನಗುವ-ಅದನ್ನು ಹರವಿ ಎತ್ತಿ–ಕಷ್ಟದಿಂದ ಹಾರಿಸುವ.

ಈ ದುಡಿವ ಜೀವಿಗಳ ನೆತ್ತರಿನ ನದಿಯಲ್ಲಿ
ಮಿಂದ ಕೆಂಬಟ್ಟೆ ಕೆಂಬಾವುಟವದಿಂದು
ಇದು ನಮ್ಮ ಬಾವುಟವು, ಜೀವನದ ಜೀವನಿಧಿ
ಉಳಿಸಿ ಉಣ್ಣಿಸಲಿರುವ ಸಾಧನವದು.

ಮಾನವ ನೆತ್ತರು ಆಗಸದಂಚಿಗೆ ಹರಿಯುವ ವರೆಗೂ ಕಾದುವೆವು.
ಜಗದ ಜನತೆಯಲಿ ಸರ್ವಸಮಾನತೆ ಮೊಳೆಯುವನಕ ಹೋರಾಡುವೆವು !

ಕೆಂಬೆಳಕು ಆರುತ್ತಾ ಬಂದು ಅಳಿಯುವುದು.

— ತೆರೆ —

# ಪ್ರಜಾ ಶಕ್ತಿ



ಒಂದೆಡೆ ನಿರ್ಮಲ, ಪ್ರಶಾಂತ ಜೀವನ. ಇನ್ನೊಂದೆಡೆ ತಲವಿಲ್ಲದ ತೆರವಿಲ್ಲದ ಜೀವನ ಚಿತ್ರ. ಎರಡರೆಡೆಯಲ್ಲೂ ಕೊಳೆತ ಸಮಾಜ, ಮಾನವನನ್ನು ಮಾನವ ತಿಂಬ ಭೀಕರ ರಾಕ್ಷಸತನ. ಕರಾಳ ಹೆಬ್ಬಾವಿನ ತಾಂಡವ. ಇದರಿಂದ ವಿಮೋಚನೆಯಿಲ್ಲವೇ? ಈ ನರಕದಿಂದ ಪಾರಾಗುವುದು ಹೇಗೆ? ಜಗದಲ್ಲಿ ಸಗ್ಗದ ರಚನೆ ಸಾಧ್ಯವಿದೆ! ಆತ್ಮಶಕ್ತಿ ಉಳಿಸಬಹುದು; ದೇಹಶಕ್ತಿ ಪ್ರಯೋಗಿಸಬಹುದು. ಅದು ಪ್ರಜಾಶಕ್ತಿಯಿಂದ ಮಾತ್ರ ಸಾಧ್ಯ.

ಸ್ವಾತಂತ್ರ್ಯ ಭಾರತದ ಹೃದಯದಲಿ ಗುಡುಗುತಿದೆ
ಇಂದೊ ನಾಳೆಯೊ ಭೂಮಿ ಬಿರಿಯಬಹುದು
ಮಾನವನ ಮೇಲೆ ಅಧಿಕಾರ ದರ್ಪದ ಬಲದೆ
ನಿಂದಿರುವ ಮಾನವರ ಮುರಿಯಬಹುದು.

ನರನ ನರ ದುಡಿಸಿ ಆಳುತೆ ನೆತ್ತರನು ಹೀರಿ
ಪೈಶಾಚಿಯಂತಿರುವ ಕಾಲವಾಯ್ತು
ನನ್ನದಿದು, ನನ್ನ ಧನ, ನನಗಾಗಿ ಈ ಜನತೆ
ನನ್ನ ಗದ್ದುಗೆ ಎನುವ ಮಾತದಾಯ್ತು.

ನನ್ನಂತೆ ಅವನು, ಅವನಂತೆ ನಾನಿಹೆನೆಂಬ
ದಿನವಿದುವು; ಅದ ಮರೆತಗುಳಿವೆಯಿಲ್ಲ
ಎಲ್ಲವೂ ಎಲ್ಲರದು ನಮ್ಮದಿದು—ನಾವೆಂಬ
ಭಾವ ಬಂದರೆ ಜನರ ಕೊಲೆಯದಿಲ್ಲ.

ಧನಿಕ—ದನಿ—ಅರಸ—ಅಧಿಕಾರ—ಧಾರ್ಮಿಕರೆಲ್ಲ
ಸ್ವಾರ್ಥದಿಂ ಬಾಳಿದಾ ಕಾಲವಾಯ್ತು
ಧನ—ನೆಲವು—ರಾಜ್ಯ—ಅಧಿಕಾರ—ಧರ್ಮಗಳೆಲ್ಲ
ಎಲ್ಲರವು; ಎನ್ನುವಾ ದಿನನೆಬಂತು.

ಯಂತ್ರನೀತಿ-ಎಂಬ ನೃತ್ಯ. ತಾಳ-ಅಭಿನಯ ಶಾಸ್ತ್ರಕ್ಕನುಗುಣವಾಗಿ, ನಾಟ್ಯಾಚಾರ್ಯನ ಆಜ್ಞೆಯಂತೆ ಈ ಭರತನಾಟ್ಯವು ಸಾಗುತ್ತದೆ. ಸ್ವಲ್ಪ ಹೊತ್ತಿನಲ್ಲಿ ಯಾಂತ್ರಿಕ ಮನೋಭಾವ, ಒಬ್ಬನ ಸಂಗೀತಕ್ಕೆ ಅನುಗುಣವಾಗಿ ಕುಣಿವ ನೀತಿಯಿಂದ ನರ್ತಕರಿಗೆ ಬೇಸರಬರುವುದು. ಅವರು ನರ್ತನ ನಿಲ್ಲಿಸುವರು. ನಾಟ್ಯಾಚಾರ್ಯನು ತಾನು ನಾಟ್ಯಾಚಾರ್ಯನಿದ್ದೇನೆ, ಸೂತ್ರಧಾರನಿದ್ದೇನೆ, ತನ್ನ ಅಪ್ಪಣೆಯಂತೆ ನರ್ತನವಾಗಬೇಕು ಎನ್ನುತ್ತಾನೆ. ಹಳೆಯ ಕಾಲ ಇನ್ನೂ ಉಳಿದಿದೆಯೇ? ಅವನ "ಅಹಂ" ಅಡಗುವುದು. ಆತ ನರ್ತಕರು ನಲಿದಂತೆ ನಲಿಯಬೇಕಾಯಿತು. ನರ್ತನ ಮುಂದೆ ಸಾಗುವುದು, ಎಲ್ಲರೂ ಜೊತೆಯಾಗಿ ನಲಿವರು.

ಲೋಕವೇ ಒಂದು ಕಾರ್ಖಾನೆಯಂತಾಗಿದೆ. ಜನತೆಯ ಜೀವನವೆಲ್ಲ ಯಾಂತ್ರಿಕವಾಗಿದೆ. ಒಬ್ಬನ ತಾಳಕ್ಕೆ ಅನುಗುಣವಾಗಿ ಮಂದಿ ಕುರಿಗಳಂತೆ ಕುಣಿಯುತ್ತಿದಾರೆ. ಆದರೆ ಅದು ಅಜ್ಞಾನದ ಕಾಲ. ಜ್ಞಾನ ಬಂದರೆ ಈ ಕುರಿಗಳೇ ಕುರುಬರಾಗುತ್ತಾರೆ. ತಾವಾಗಿ ತಮ್ಮ ಕಾಲಮೇಲೆ ನಿಲ್ಲಲು ಶಕ್ತರಾಗುತ್ತಾರೆ. ಜಗತ್ತೇ ಮಹಾಜನರದಾಗುತ್ತದೆ; ಎಲ್ಲರದಾಗುತ್ತದೆ; ಬಡವರ ಸ್ವರ್ಗವಾಗುತ್ತದೆ.

ಇದು ಜೀವನ ನೃತ್ಯವಾಗುತ್ತದೆ.

ನೃತ್ಯವು ಮುಗಿಯುವುದು. ರಂಗದ ಎಡಬದಿಯಿಂದ ಚಮ್ಮಟಿಕೆ ಹಿಡಿದ
ಕೂಲಿಗಾರರು ಪ್ರವೇಶಿಸುವರು.

ಧನಿಕರ ದರ್ಪದ ಬೆಂಕಿಯುರಿಯಲಿ
ಕೆಂಪಾಗಿದೆ ಜೀವ
ಬಂಡವಲಿಗರಾ ಸ್ವಾರ್ಥದುಸಿರಲಿ
ಬೆಂಡಾಗಿದೆ ಭಾವ.

ದುಡಿವರ ರಕ್ತದ ಓಕುಳಿಯಾಡುವ
ದೈವವಳಿದಿಯಿಲ್ಲ
ರೈತರ ಸುಲಿದು ರಕ್ತ ಕುಡಿಯುವ
ತಗಣಿ ಅಳಿಯಲಿಲ್ಲ.

ಕತ್ತಲಿಲ್ಲದೆ ಬೆಳಕದು ಇಲ್ಲ;
ಬೆಳಕು ಬಹದು ಸಿದ್ಧ

ಸುಲಿಗೆ ಸೂರೆಗಳ ನಾಶದ ಕಾಲ
ಹತ್ತಿರವಿದೆ ಸಿದ್ಧ !

ಧರ್ಮದ ಮುಸುಕನು ಹಾಕಿ ಜನತೆಯಾ
ಸುಡುವ ಮಂದಿಯಿಂದ
ಧರ್ಮವಳಿದಿದೆ, ಸುಟ್ಟಿರು ದೇವನ
ಬಡವನ ಕೊಲೆಯಿಂದ.

ಹೊರಗಿನ, ಒಳಗಿನ, ನೆರೆಯ ವೈರಿಯಾ
ಅಳಿಸದೆ ಗೆಲುವಿಲ್ಲ
ಸಮರ ತೊಡಗಿದೆ, ಕಾದು ವೈರಿಯ
ಸೋಲು ಎಂಬುದಿಲ್ಲ.

ಬಡವರ ನೆತ್ತರು ಕುಡಿದ ದೇಹದ
ನೆತ್ತರ ಹೊಳೆಹರಿಸು
ನಿನ್ನ ನೆತ್ತರಿನ ಧ್ವಜವನು ಎತ್ತು
ಲೋಕಶಾಂತಿ ಬರಿಸು.

ರಂಗದ ನಡುಮಧ್ಯದಿಂದ ಎಡಕ್ಕೆ ನಿಂತುಕೊಳ್ಳುವರು. ರಂಗದ ಬಲಬದಿಯಿಂದ ರೈತರು ಕುಡುಗೋಲು, ಹಾರೆಗಳನ್ನು ಹಿಡಿದುಕೊಂಡು ಬರುವರು. ಇವರಲ್ಲಿ ಮುನ್ನಡೆಗೆ ನಡೆವವ ಮುಸ್ಲಿಮ್ ರೈತ. ಕೈಯಲ್ಲಿ ಕುಡುಗೋಲಿದೆ. ರಂಗದ ಬಲ ಅರ್ಧಭಾಗದಲ್ಲಿ ನಿಲ್ಲುವರು. ಸುತ್ತಿಗೆ ಹಿಡಿದ ಹಿಂದೂ ಕೂಲಿಯ ಬಳಿ ಕುಡುಗೋಲು ಹಿಡಿದ ಮುಸ್ಲಿಂ ರೈತ ನಿಲ್ಲುತ್ತಾನೆ.

ಕೆಂಬಾವುಟದಡಿ ನಡೆಯುವೆವು
ನಮ್ಮ ಜಯವ ನಾವೇ ತಹೆವು ||

ನಮ್ಮ ಶಕ್ತಿ ನಮಗೀವುದು ಬುತ್ತಿ
ನಡೆಯಿರಿ ರಕ್ತ ಪತಾಕೆಯನೆತ್ತಿ

ನಮ್ಮದು–ರೈತರದೀ ಧ್ವಜ, ಬನ್ನಿರಿ
ಒಂದಾಗಿರಿ, ಇದರಡಿ ಜಯತನ್ನಿರಿ.

ದುಡಿವರ–ಬಡವರ– ನೆತ್ತರಿಂದಲಿದು
ಕೆಂಪಾಗಿದೆ; ನಮ್ಮಯ ಪ್ರಾಣವಿದು;
ತನುಮನಧನವೆಲ್ಲವ ಇದಕಿತ್ತರೆ
ನಮ್ಮ ರಾಜ್ಯದಾ ಗುಡಿಯಿದಾಗುವುದು.

ನಮ್ಮ ಹೊಲದ–ದುಡಿತದ–ಮೇಲೊಡೆತನ
ನಮ್ಮ ಜನಕೆ ಮಾನವನ ಸಮತನ
ದುಡಿತ–ಅನ್ನ–ಸುಖವೀವ ಸಗ್ಗತನ
ತರೆ ಬನ್ನಿರಿ, ಸಾಗಲಿ ಈ ಕದನ.

ಬನ್ನಿರಿ ಮಣ್ಣಿನ ಮಕ್ಕಳೆ ಬನ್ನಿ
ಕೂಲಿಗಾರರೊಡಗೂಡಲು ಬನ್ನಿ
ತರುಣ ಧಮನಿ ಕರೆವುದು ಇದೊ ಬನ್ನಿ
ನಾವೊಂದಾಗಲು ಜಯ ನಮಗೆನ್ನಿ.

ರಂಗದೆರಡು ಬದಿಗಳಿಂದ ತರುಣರು–ವಿದ್ಯಾರ್ಥಿಗಳು ಬಾವುಟಗಳೊಂದಿಗೆ ರುವರು. ಅವರು ರೈತ ಕೂಲಿಗಾರರ ಹಿಂಗಡೆಗೆ ನಿಲ್ಲುವರು. ಕೆಂಬಾವುಟವ–ಬಟ್ಟೆ–ರೈತಕೂಲಿಗಳ ಸಾಲು ಒಂದುಗೂಡುವಲ್ಲೇ ಹಿಂಗಡೆ ಹಾರುತ್ತಿದೆ.

ಮುಗ್ಗುಲಿಗೆ–ರಾಷ್ಟ್ರಧ್ವಜ–ಲೀಗ್ ಧ್ವಜಗಳು !

ಧುಮುಧುಮು ದುಡಿಯುವ ದಮನಿಯಾಂತವರೆ
ಬನ್ನಿ ; ನಾಡಿಗರೇ ಬನ್ನಿ !

ಹಳಿಗ್ಗುಡಿಯುರುಳಿಸಿ ಕಸವನು ತೊಡೆವರೆ
ಬನ್ನಿರಿ ; ದುಡಿವರೆ ಬನ್ನಿ !

ಎಲ್ಲರೊಂದೆ ಎಂಬುವವೇ ಪ್ರಳಯ
ತನ್ನಿರಿ; ಅದನೇ ತನ್ನಿ!

ಇಂದು ರಚಿಸುವ. ಭೂಮಿಲಿ ಸ್ವರ್ಗವ
ಬನ್ನಿರಿ; ಮುಂದಕೆ ಬನ್ನಿ!

ಎಲ್ಲರೂ ಒಂದಾಗಿ ಪಲ್ಲವಿಯನ್ನು ಹಾಡುವರು. ರೈತನು ಕತ್ತಿಯನ್ನು ಮೇಲೆತ್ತುವನು. ಕೂಲಿಗಾರನ ಕೊಡತಿ ಅದನ್ನು ಕೂಡಿಕೊಳ್ಳುವುದು. ಹಿಂದಕ್ಕೆ ಕೆಂಬಟ್ಟೆ ಹಾರುತ್ತಿದೆ. ಅದರ ಮುಂದೆ–ಮೇಲೆ–ಈ ಕತ್ತಿ ಸುತ್ತಿಗೆಗಳ ಅಚ್ಚೊತ್ತು. ಇದೀಗ ಕೆಂಬಾವುಟ! ಜಮೀನ್ದಾರ–ಶಾಸ್ತ್ರಿ–ಮುಂತಾದವರು ತಲೆತಗ್ಗಿಸಿಕೊಂಡು ಕೂಲಿಗಾರರ ಮುಂದಿನಿಂದ ಹಾದು ಹೋಗುವರು. ಶೋಷಣೆ ತಪ್ಪಿತೆಂಬ ಬೇಸರವಿದೆ.

ನಿದ್ದೆ ತಿಳಿದು ಹಸಿದಾಳ್ಗಳೆ ಏಳಿ
ತುಟ್ಟಿಯ ಬಂಧಿಗಳೇ ಏಳಿ–
ಕ್ರಾಂತಿಯ ಗುಡುಗಾಟವನಿದೊ ಕೇಳಿ
ಕಪಟ ಅನೀತಿಗೆ ಬಂತು ಅಳಿ.

ಕುರುಡು ನಂಬಿಕೆಗಳೆಲ್ಲವನೊಗೆದು
ನಿರ್ಬಲ ಜನತೆಯೆ ಎದ್ದೇಳಿ!
ಹಳೆನೀತಿಯ ಹುಡಿಗೂಡಿಸಿ ತುಳಿದು
ಹೊಸರೀತಿಯ ತರಲೆದ್ದೇಳಿ!

ಬಂಧುಗಳೇ ಒಂದಾಗಿರಿ ಎಲ್ಲ
ಕೊನೆಯ ಕಾಳಗವನಿದಿರಿಸುವ
ಅಂತರ್ರಾಷ್ಟ್ರೀಯತೆಯೇ ನಮ್ಮ
ಬಂಧ! ಜನರನೊಂದಾಗಿಸುವ!



# ಭಾರತೀಯ ಪ್ರಗತಿಶೀಲ ಲೇಖಕರ ಸಂಘ

**ಬೆಂಗಳೂರು ಸಮಿತಿ**

ಭಾರತೀಯ ಸಮಾಜದಲ್ಲಿ ಕ್ರಾಂತಿಕಾರಕ ಬದಲಾವಣೆಗಳಾಗುತ್ತಿವೆ. ಅಂತ್ಯ ಅವಸಾನಕ್ಕೇ ದಕ್ಕದ ಪ್ರತಿಕ್ರಿಯೆ ಇನ್ನೂ ತನ್ನ ಕೈಚಳಕವನ್ನು ತೋರುತ್ತಾ ಬಾಳಿ ಬದುಕಲು ಹವಣಿಸುತ್ತಿದೆ.

ಭಾರತೀಯ ಜೀವನದಲ್ಲಾಗುತ್ತಿರುವ ಬದಲಾವಣೆಗಳನ್ನು ರೂಪಿಸಿ, ಪ್ರಾಗತಿಕ ಮನೋಭಾವಕ್ಕೆ ಸಹಾಯಮಾಡಬೇಕಾದುದು ಭಾರತೀಯ ಲೇಖಕರ ಆದ್ಯ ಕರ್ತವ್ಯವಾಗಿದೆ.

ಪುರಾಣ ಸಾಹಿತ್ಯ ಕುಸಿದು ಬಿದ್ದಮೇಲೆ ತಲೆಯೆತ್ತಿದ ಭಾರತೀಯ ಸಾಹಿತ್ಯ, ಜೀವನದ ಸಹಜತೆಯಿಂದ ದೂರಸರಿಯುವ ಮನೋಭಾವವನ್ನು ವ್ಯಕ್ತಪಡಿಸುತ್ತಿದೆ. ಅದು ಸಹಜತೆಯಿಂದ ದೂರವಾಗಿ ಅಧ್ಯಾತ್ಮವಾದದಲ್ಲಿಯೂ. ಆದರ್ಶವಾದದಲ್ಲಿಯೂ ಆಶ್ರಯ ಪಡೆಯಲೆತ್ನಿಸುತ್ತಿದೆ. ಪರಿಣಾಮವಾಗಿ ಅದು ಕ್ಷಯಿಸಿ, ಮಾನಸಿಕ, ದೈಹಿಕ ದೌರ್ಬಲ್ಯಗಳನ್ನು ತೋರಿಸಿ ಒಂದು ಬಗೆಯ ಕಠೋರ ಸಂಪ್ರದಾಯ ಪ್ರಿಯತೆಯನ್ನೂ ವಿಕೃತ ಆದರ್ಶವಾದವನ್ನೂ ನಿರ್ಣಯಮಾಡಿದೆ. ಅದರ ಗುಹ್ಯ, ಭಕ್ತಿವಾದ, ಲೈಂಗಿಕ ವಿಚಾರಗಳ ಬಗ್ಗೆ ಇರುವ ವಿಚಾರ ಹೀನದೃಷ್ಟಿ, ರಸೋದ್ರಿಕ್ತ ಪ್ರದರ್ಶನಗಾರಿಕೆ, ನಿಸರ್ಗ ಶೂನ್ಯತೆಗಳೇ ಇದಕ್ಕೆ ಸಾಕ್ಷಿಗಳಾಗಿವೆ.

ಸಂಪ್ರದಾಯ ಶರಣರ ಕೈಗೆ ಸಿಕ್ಕಿ ಕೊರಗಿ ಅಪಗತಿಹೊಂದುತ್ತಿರುವ ಸಾಹಿತ್ಯ, ಕಲೆಗಳನ್ನು ಅವರ ಬಂಧನದಿಂದ ಪಾರುಮಾಡುವುದೇ ಈ ಸಂಘದ ಉದ್ದೇಶ. ಜನತೆಯ ಸಮೀಪಕ್ಕೆ ಕಲೆಗಳನ್ನು ತರಬೇಕು. ಅವು ನೈಸರ್ಗಿಕ ಜೀವನದ ಕನ್ನಡಿಗಳಾಗುವುದಲ್ಲದೆ ಭವಿತವ್ಯದ ಪ್ರವಾದಿಗಳಾಗುವಂತೆ ಮಾಡಬೇಕೆಂಬುದೇ ನಮ್ಮ ಗುರಿಯಾಗಿದೆ.

ಪುರಾತನ ಸಂಸ್ಕೃತಿಯ ಪೀಳಿಗೆಯವರೆಂದು ಹೆಮ್ಮೆ ಪಟ್ಟುಕೊಳ್ಳುವ ಜತೆಗೆ ನಾವು ಪ್ರತಿಕ್ರಿಯೆಯ ಸಬಲ ಸೈನ್ಯಗಳನ್ನು ತೀವ್ರವಾಗಿ ವಿರೋಧಿಸುತ್ತೇವೆ. ಭಾರತೀಯ ಹಾಗೂ ವಿದೇಶೀಯ ಸಾಹಿತ್ಯಗಳ ಸಹಾಯದಿಂದ ನಾವು ನವಜೀವನದ ನಿರ್ಮಾಣಕ್ಕೆ ಹೇತುವಾದ ಮನೋಭಾವವನ್ನು ಬೆಳಸಲು ವ್ಯಾಖ್ಯಾತ್ಮಕ ಹಾಗೂ ಕ್ರಿಯಾತ್ಮಕ ಸಾಹಿತ್ಯ ರಚನೆಯ ಮೂಲಕ ಶ್ರಮಿಸುತ್ತೇವೆ. ಹೊಸ ಸಾಹಿತ್ಯ ಭಾರತೀಯರ ಜೀವಂತ ಸಮಸ್ಯೆಗಳಾದ ಹಸಿವು, ದಾರಿದ್ರ್ಯ, ಸಾಮಾಜಿಕ ಅಪಗತಿ, ರಾಜಕೀಯ ಪರಾಶ್ರಯತೆಗಳನ್ನು ಎದುರಿಸಬೇಕೆಂದು ನಮ್ಮ ದೃಢ ಅಭಿಪ್ರಾಯವಾಗಿದೆ.

ಆಲಸ್ಯ, ಕಾರ್ಯವಿಮುಖತೆ, ಅವಿಚಾರಗಳಿಗೆ ನಮ್ಮನ್ನು ಎಳೆಯುವುದೆಲ್ಲವನ್ನೂ ನಾವು ಪ್ರತಿಕ್ರಿಯಾ ರೂಪಗಳೆಂದು ತಿರಸ್ಕರಿಸುತ್ತೇವೆ.

ವಿಚಾರದ ಬೆಳಕಿನಲ್ಲಿ ಸಂಸ್ಥೆ, ಆಚರಣೆಗಳನ್ನು ಪರೀಕ್ಷಿಸಲು ನೆರವಾಗಿ ನಮ್ಮಲ್ಲಿ ಸಂಘಟನಶಕ್ತಿ, ಕ್ರಿಯಾಶಕ್ತಿಗಳನ್ನು ಹುಟ್ಟಿಸುವುದೆಲ್ಲವನ್ನೂ ನಾವು ಪ್ರಾಗತಿಕ ಎಂದು ಭಾವಿಸುತ್ತೇವೆ.

**ಉದ್ದೇಶ**—೧. ದೇಶದ ವಿವಿಧ ಭಾಷಾ ಕೇಂದ್ರಗಳೊಂದಿಗೆ ಸಂಪರ್ಕವಿಟ್ಟುಕೊಳ್ಳಲು ಲೇಖಕರ ಸಂಘಗಳನ್ನು ಸ್ಥಾಪಿಸಿ ಈ ಸಂಘಗಳ ಕಾರ್ಯಕಲಾಪಗಳನ್ನು ಒಗ್ಗೂಡಿಸಿ ಸಮ್ಮೇಳನಗಳನ್ನು ನಡಸುವುದು, ಗ್ರಂಥಗಳನ್ನು ಪ್ರಕಟಿಸುವುದು; ಕೇಂದ್ರ ಸಂಸ್ಥೆಗೂ, ಪ್ರಾಂತಿಕ ಸಂಸ್ಥೆಗಳಿಗೂ ನಿಕಟ ಬಾಂಧವ್ಯವನ್ನೇರ್ಪಡಿಸುವುದು; ಸಂಘದ ಮೂಲ ತತ್ವಗಳಿಗೆ ವಿರೋಧವಾಗಿರದ ಸಂಘ ಸಂಸ್ಥೆಗಳೊಂದಿಗೆ ಸಹಕರಿಸುವುದು.

೨. ಸಾಂಸ್ಕೃತಿಕ ಪ್ರತಿಕ್ರಿಯೆಯ ಜತೆಯಲ್ಲಿ ಹೋರಾಡಲು ಪ್ರಾಗತಿಕ ಸ್ವರೂಪದ ಸಾಹಿತ್ಯವನ್ನು ಸೃಷ್ಟಿಮಾಡುವುದು ಮತ್ತು ಅನುವಾದಮಾಡಿ ಪ್ರಕಟಿಸುವುದು. ಈ ಮೂಲಕ ಭಾರತೀಯ ಸ್ವಾತಂತ್ರ್ಯ ಕಲ್ಪನೆಗೂ, ಸಾಮಾಜಿಕ ಪುನರುಜ್ಜೀವನಕ್ಕೂ ಇಂಬುಗೊಡುವುದು.

೩. ಲೇಖಕರ ಹಕ್ಕುಬಾಧ್ಯತೆಗಳನ್ನು ರಕ್ಷಿಸುವುದು.

೪. ಸ್ವತಂತ್ರ ವಿಚಾರ, ಉಚ್ಚಾರಗಳ ಹಕ್ಕಿಗಾಗಿ ಹೋರಾಡುವುದು.

**ಕಾರ್ಯರೂಪ** :—ಈ ಉದ್ದೇಶಗಳನ್ನು ಕೆಳಗೆ ಕಾಣಿಸಿರುವಂತೆ ಪ್ರಗತಿಶೀಲ ಲೇಖಕರ ಸಂಘ ಕಾರ್ಯರೂಪಕ್ಕೆ ತರುತ್ತದೆ:

೧ ರಾಷ್ಟ್ರೀಯ ಐಕ್ಯಮತ್ಯವನ್ನೂ, ಪರಾಕ್ರಮಣಕ್ಕೆ ವಿರುದ್ಧವಾದ ರಾಷ್ಟ್ರೀಯ ರಕ್ಷಣವನ್ನೂ ಒತ್ತಿ ಹೇಳುವ ಸಣ್ಣ ನಾಟಕಗಳನ್ನು ಪ್ರದರ್ಶಿಸುವುದು. ಸಣ್ಣಕಥೆ, ಕವಿತೆ, ಹಾಡು, ಲಾವಣಿಗಳ ರಚನಕ್ಕೇರ್ಪಡಿಸುವುದು

೨. ಇತ್ತೀಚಿನ ಪ್ರಾಗತಿಕ ಸಾಹಿತ್ಯ (ವಿಶೇಷವಾಗಿ ರಷ್ಯಾ ಮತ್ತು ಚೀನಾ) ವನ್ನು ಅನುವಾದಿಸಿ ಪ್ರಕಟಿಸಿ ಪ್ರಸಾರಮಾಡುವುದು.

೩. ಶ್ರಮಜೀವಿಗಳ ಮತ್ತು ರೈತರಿಗಾಗಿ ಸಾಹಿತ್ಯ, ಕಲಾಕೂಟಗಳನ್ನೇರ್ಪಡಿಸುವುದು. ಪ್ರಗತಿಶೀಲ ಲೇಖಕರ ಸಂಘವನ್ನು ಜನಪದ ಸಾಹಿತ್ಯ ಕಲೆಗಳೊಂದಿಗೆ ಕೂಡಿಸುವುದು.

೪. "ಭಾರತೀಯ ಜನತಾ ರಂಗಭೂಮಿ" ಯವರೊಂದಿಗೆ ನಾಟಕಗಳನ್ನು ಬರೆಯಲು, ಆಡಲು ಸಹಕರಿಸುವುದು.

೧೨೧, ಸುಲ್ತಾನ್‌ಪೇಟೆ,
ಬೆಂಗಳೂರು ಸಿಟಿ.

ಕಾರ್ಯದರ್ಶಿಗಳು—
ಕೃಷ್ಣರಾವ ನಾಡಿಗೇರ
ಅ. ಸೋಗಾಲ.